ಡಾ ॥ ದೇವರ ಕೊಂಡಾರೆಡ್ಡಿ *

# ಶಿವಮಾಂಧಾತೃವರ್ಮ್ಮನ ಮುತ್ತೂರ ತಾಮ್ರ ಶಾಸನ

ಬ್ಯಾಡಗಿ ತಾಲೂಕಿನ ಮುತ್ತೂರು ಗ್ರಾಮದ ಶಿವಪ್ಪ ಬಸಪ್ಪ ಅಂಗಡಿ ಎಂಬುವರ ಬಳಿ ಈ ತಾಮ್ರ ಪಟಗಳಿದ್ದುವು. ಇವರಿಗೆ ಇವು ಮುತ್ತೂರು ಹಾಗೂ ಅದೇ ತಾಲೂಕಿನ ತಡಸದ ಮಧ್ಯೆ ಇರುವ ಪಾಳುಗ್ರಾಮು ನಿವೇಶನದಲ್ಲಿ ಸಿಕ್ಕಿದ್ದುದ್ದಾಗಿ ತಿಳಿಯುತ್ತದೆ. ಈ ಶಾಸನವು ಎರಡು ಹಲಗೆಗಳನ್ನು ಹೊಂದಿದ್ದು, ಪ್ರಾರಂಭದ ಹಲಗೆ ಮತ್ತು ಮುದ್ರೆ ಇಲ್ಲ. ದೊರಕಿರುವ ಹಲಗೆಗಳಲ್ಲಿ ಒಂದನೆಯ ಹಲಗೆಯ ಎರಡು ಮಗ್ಗುಲಲ್ಲಿ. ಎರಡನೆಯ ಹಲಗೆಯ ಒಳಭಾಗದಲ್ಲಿ ಬರವಣಿಗೆ ಇದೆ. ಪ್ರತೀಮುಖದಲ್ಲೂ ನಾಲ್ಕು ಸಾಲುಗಳನ್ನು ಹೊಂದಿದ್ದು ಒಟ್ಟು ೧೨ ಸಾಲುಗಳನ್ನು ಒಳಗೊಂಡಿದೆ.

ಶಾಸನದ ಲಿಪಿಗಳು ಕದಂಬರ ಕಿಱುಕುಪ್ಪಟೂರು ಶಾಸನದ (ಕೆ.ಐ. ೨) ಲಿಪಿಗಳನ್ನು ಹೋಲುತ್ತದೆ. ತಾಳಗುಂದ ಶಿಲಾಶಾಸನಕ್ಕಿಂತ ಲಿಪಿ ಸ್ವಲ್ಪ ಅಗಲವಾಗಿದೆ. ತಲೆಯ ಮೇಲೆ ಇರುವ ಪೆಟ್ಟಿಗೆಗಳು ಆಳವಾಗಿ ಸ್ಪಷ್ಟವಾಗಿವೆ. 'ತ'ಕಾರ, 'ನ'ಕಾರಕ್ಕೆ ಇರುವ ವ್ಯತ್ಯಾಸ ಅತ್ಯಲ್ಪ. ಅಕ್ಷರಗಳು ನೀಳವಾಗಿವೆ. ಅನೇಕ ಕಡೆ ಅನುಸ್ವಾರಗಳನ್ನು ಸ್ಪಷ್ಟವಾಗಿ ತೋರಿಸಿಲ್ಲ. ಕೆಲವೆಡೆ ವರ್ಗಾಕ್ಷರಗಳ ಮಧ್ಯೆ ಬರಬೇಕಾದ ಅನುನಾಸಿಕಗಳನ್ನು ಬಳಸದೆ ಅಲ್ಲಿಯೂ ಅನುಸ್ವಾರಗಳನ್ನೇ ಬಳಸಿರುತ್ತಾರೆ. ಕೆಲವೆಡೆ ಕೆತ್ತುವಾಗ ಅಕ್ಷರ ಸ್ಖಾಲಿತ್ಯಗಳು ಉಳಿದಿವೆ. ಉದಾ : ಎರಡನೆಯ ಸಾಲಿನಲ್ಲಿ ಬರುವ ಗುರು ಶಬ್ದದ 'ಗು'ಕಾರ ಮತ್ತು 'ರು'ಕಾರ.

ಶಾಸನದಲ್ಲಿ ಮೊದಲ ಹಲಗೆ ಕಳೆದಿರುವುದರಿಂದ ಶಾಸನೋಕ್ತ ರಾಜನ ವಂಶವಾಗಲೀ, ವಂಶಾವಳಿಯಾಗಲೀ ಎಲ್ಲಿಂದ ರಾಜ್ಯವಾಳುತ್ತಿದ್ದನೆಂಬ ಉಲ್ಲೇಖವಾಗಲೀ ದೊರೆಯುವುದಿಲ್ಲ. ಶಾಸನದಲ್ಲಿ 'ಶ್ರೀ ವಿಜಯ ಶಿವ ಮಾಂಧಾತೃವವರ್ಮ್ಮಣ' ಎಂದಿರುವುದರಿಂದ ಕದಂಬ ವಂಶದವನೆಂದು ಹೇಳಬಹುದಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ದೊರೆತಿರುವ ಶಾಸನದಲ್ಲಿ (ಎ. ಕ., ೭, ೮, ಶಿಕಾ ೧೨೯ ಸಪ್ಲಿ) ಇವನು ಕದಂಬ ರಾಜನೆಂದು ಹೇಳಿಕೊಂಡಿರುವುದರಿಂದ, ಇವನೂ ಅದೇ ಮಾಂಧಾತೃವರ್ಮ್ಮನಾಗಿರಬೇಕು. ಶಾಸನದ ಲಿಪಿ ತಾಳಗುಂದ ಶಾಸನದ ಲಿಪಿಗಳಿಗಿಂತ ಸ್ವಲ್ಪ ಹೆಚ್ಚಿನ ಬೆಳವಣಿಗೆಯನ್ನು ತೋರಿಸುತ್ತಿರುವುದರಿಂದ ಈತನು ಕಾಕುಸ್ಥವರ್ಮನ ನಂತರ ರಾಜನಾಗಿರ ಬೇಕು.

ಶಾಸನದಲ್ಲಿ ರಾಜನನ್ನು 'ಧರ್ಮಮಹಾರಾಜೇನ ಸತ್ಯವ್ರತೇನಾ ಕ್ಲಿಷ್ಟ ಕರ್ಮ್ಮಣ' ಎಂಬ ವಿಶೇಷಣಗಳಿಂದ ಕರೆದಿದೆ. ಕದಂಬವಂಶಾವಳಿಯನ್ನು ಗುರುತಿಸುವ ವಿದ್ವಾಂಸರು ಮಾಂಧಾತೃವರ್ಮನು ಐದರಿಂದ ಏಳು ವರ್ಷಗಳಕಾಲ ರಾಜ್ಯಭಾರಮಾಡಿದಂತೆ ತಿಳಿಸಿರುತ್ತಾರೆ ಆದರೆ ಈ ಶಾಸನದಲ್ಲಿ ಆಳ್ವಿಕೆಯ ೧೩ನೆಯ ವರ್ಷದ ಉಲ್ಲೇಖ ವಿರುವುದರಿಂದ ಈತ ಸುಮಾರು ೧೫ ವರ್ಷಗಳ ಕಾಲ ರಾಜ್ಯಭಾರ ಮಾಡಿರಬೇಕು.

ಶಾಸನದಲ್ಲಿ ಕಾಲದ ಸ್ಪಷ್ಟ ಉಲ್ಲೇಖವಿಲ್ಲ. 'ತ್ರಯೋದಶೇ ಹೇಮನ್ತ ಪಕ್ಷೇ ಪ್ರಥಮೇ ದಿವಸೇ ಪಂಚದಶೇ' ಎಂದಿದ್ದು ಆಳ್ವಿಕೆಯ ೧೩ನೆಯ ವರ್ಷದಲ್ಲಿ ಹೇಮಂತಮಾಸದ ಮೊದಲ ಪಕ್ಷದ ೧೫ನೇ ದಿನದಂದು ದಾನನೀಡಿದಂತೆ ಹೇಳಿದೆ. ಶಕವರ್ಷದ ಉಲ್ಲೇಖವಿಲ್ಲ. ಈ ಶಾಸನದ ಕಾಲವನ್ನು ಕ್ರಿ.ಶ.ಸು ೪೫೦ ರಿಂದ ೫೦೦ಕ್ಕೆ ನಿಗದಿ ಪಡಿಸಬಹುದಾಗಿದೆ. ವಿದ್ವಾಂಸರು ಮೃಗೇಶವರ್ಮನ ನಂತರ ಇವನು ರಾಜ್ಯಭಾರಮಾಡಿರ ಬೇಕೆಂದು ಊಹಿಸುತ್ತರಾದರೂ ಶಾಸನದ ಲಿಪಿದೃಷ್ಟಿಯಿಂದ ಮಾಂಧಾತೃವರ್ಮನು ಮೃಗೇಶನಿಗಿಂತ ಮೊದಲು ರಾಜ್ಯಭಾರಮಾಡಿರ ಬೇಕು. ಈ ಉಪಲಬ್ಧ ಶಾಸನವು ಸದ್ಯಕ್ಕೆ ಇವನ ಎರಡನೆಯ ಶಾಸನವಾಗಿದೆ. (ಮೊದಲನೆಯದು ಎ.ಕ. ೭ ಶಿ.ಕಾ. ೨೯, ಕೂಡಗೆರೆ ತಾಮ್ರ ಪಟಗಳು).

* ರೀಡರ್, ಶಾಸನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕಮಲಾಪುರ ೫೮೩೨೨೧

ಶಾಸನದಲ್ಲಿ ಮಾಂಧಾತೃವರ್ಮನು ಮೂಕುನ್ನಹಾರಕ್ಕೆ ಸೇರಿದ 'ವಲಶಟ್ಟಿ' ಎಂಬ ಗ್ರಾಮವನ್ನು 'ತೈತ್ತರೀಯ ದ್ರೋಣಾರ್ಯ್ಯವಲಾರ್ಯ್ಯ'ನಿಗೆ ದಾನನೀಡಿದಂತೆ ಹೇಳಿದೆ. ಇವನಿಗೆ ಇಪ್ಪತ್ತು ನಿವರ್ತ್ತನದಷ್ಟು ಹಲಕ್ಷೇತ್ರವನ್ನು ರಾಜನು ನೀಡುತ್ತಾನೆ. ಶಾಸನದಲ್ಲಿ ಉಲ್ಲೇಖಿತವಾಗಿರುವ ಮೂಕುನ್ನಹಾರ, ವಲಶಟ್ಟಿಗ್ರಾಮಗಳು ಯಾವುವೆಂದು ಗುರುತಿಸುವುದು ಕಷ್ಟ. ಆದರೂ ಈ ಶಾಸನ ದೊರೆತ ಸ್ಥಳಕ್ಕೆ ಸನಿಹದಲ್ಲಿರುವ ಈಗಿನ ಚಿನ್ನ ಮುಳಗುಂದ ಮೂಕುನ್ನಹಾರವೆಂದು ಗುರುತಿಸಬಹುದಾಗಿದೆ. ಮೂಕುನ್ನ ಮುಂದೆ ಮುಳಗುಂದ ಅಥವಾ ಮುಟಗುಂಡವೇ ಸಂಸ್ಕೃತೀ ಕರಣವಾಗಿ ಮೂಕುನ್ನವಾಗಿರ ಬಹುದು. ಈಗಿನ ಚಿನ್ನ ಮುಳಗುಂದದಲ್ಲಿ ಕದಂಬರಕಾಲದ ಅವಶೇಷಗಳು ಕಾಣಬರದಿದ್ದರೂ, ರಾಷ್ಟ್ರಕೂಟರಕಾಲದ ಅವಶೇಷಗಳಾಗಿ ವೀರಗಲ್ಲು ದೊರೆತಿದೆ. ವಲಶಟ್ಟಿಗ್ರಾಮವು ಈಗಿನ ಶಾಸನ ದೊರೆತ ಪಾಳುಗ್ರಾಮವಾಗಿರಬಹುದು.

ಈ ಶಾಸನವನ್ನು ಬರೆದವನು ರಹಸ್ಯಾಧಿಕಾರಿಯಾಗಿದ್ದ ದಾಮೋದರರದತ್ತ ಎಂಬುವವನು. ಇದೇ ರಾಜನ ಕೂಡಿಗೆರೆ ಶಾಸನವನ್ನು ಬರೆದವನೂ ಸಹ ಇವನೇ ಆಗಿರುತ್ತಾನೆ. ಲಿಪಿಯ ಹಾಗೂ ವಿಷಯದ ದೃಷ್ಟಿಯಿಂದ ನೈಜಶಾಸನ 'ವಾಗಿದ್ದು ಕದಂಬರ ಇತಿಹಾಸದ ಮೇಲೆ ಹೆಚ್ಚಿನ ಬೆಳಕನ್ನು ಬೀರಬಲ್ಲದುದಾಗಿದೆ.

**ಶಾಸನ ಪಾಠ**

**ಮೊದಲಹಲಗೆಯ ಮುಂಭಾಗ**

೧. ತ್ರಯೋದಶೇ ಹೇಮನ್ತ ಪಕ್ಷೇ ಪ್ರಥಮೇ ದಿವಸೇ ಪ [೦]ಚದಶೇ ಆಹವಾರ್ಜ್ಜಿತ
೨. ವಿಪುಲ ಪರಮ ದೃಢಿ ಸತ್ಯೇನ ॥ ದೇವ ಬ್ರಾಹ್ಮಣ (ಗುರೂ) ಶುಶ್ರಷ ಭಿರೇತೇನ
೩. ವಿದಿತ ಧರ್ಮಾರ್ತ್ಥ ಸದ್ಭಾದತ ॥ ಧರ್ಮ್ಮ ಮಹಾ(ರಾ)ಜೇ[ನ] ಸತ್ಯವ್ರತೇನಾ ಕ್ಲಿಷ್ಟ
೪. ಕರ್ಮಣಾ ಶ್ರೀ ವಿಜಯ ಶಿವ ಮಾನ್ಧಾತೃವರ್ಮಣಾ ॥ ಮೂಕುನ್ನಹಾರೇ ವಲಶಟ್ಟಿಗ್ರಾಮೇ

**ಮೊದಲ ಹಲಗೆಯ ಹಿಂಭಾಗ.**

೫ ..... ಸದಕ್ಷಣಂ ಸರ್ವಪರಿಹಾರ ಸ(೦)ಯುಕ್ತ[೦]ತೈತ್ತರೀಯಸಶ್ರೀಹು
೬ ಪಾರಿಭ್ಯಾಮ್ ... ಕರಸ ಗೋತ್ರಾಭ್ಯಾಮ್ ॥ದತ್ತಾನು ಯೋಗಾಭ್ಯಾಮ್ ॥ದ್ರೋಣಾರ್ಯ್ಯವಲಾರ್ಯ್ಯಭ್ಯಾಮ್ ॥
೭ ವಿಂಶ[ತಿ]ನಿವರ್ತಾನಿ ಹಲಕ್ಷೇ(ತ್ರಂ) ದತ್ತಂ॥ ಪ್ರಮಾದದ ಧರ್ಮಾ ಧ್ವಯೋಸ್ಯಾಭಿಹನ್ತಿ
೮ ಸಪ[೦]ಚ ಮಹಾಪಾತಕ ಸ[೦]ಯುಕ್ತೋ ಭವತಿ ॥ ಯೋಸ್ಯಾಭಿರಕ್ಷಿತಾ ಸತತ್ಪಲ...

**ಎರಡನೆಯ ಹಲಗೆಯ ಮುಂಬದಿ**

೯ ಭವತಿ ॥ ಅಪಿಚ ॥(ಸ್ವ) ದತ್ತಾ[೦] ಪರದತ್ತಾ[೦] ವಾಯೋಹರೇತ ವಸುನ್ಧರಾ ಷ[ಷ್ಟಿ]
೧೦ [ವ]ರ್ಷ ಸಹಸ್ರಾಣಿ ನರಕೇ ಪಚ್ಯತೇ ತುಸ: ॥ ಬಹುಭಿರ್ವ್ವಸುಧಾಭುಕ್ತಾ
೧೧ ರಾಜಜಭಿಸ್ಸಗರಾಧಿಭಿ:ಯಸ್ಯಯಸ್ಯಯದಾ ಭೂಮಿ ಸ್ತಸ್ಯತಸ್ಯತದಾಪಲಮ್
೧೨ ದಾಮೋದರರದತ್ತೇನ ರಹಸ್ಯಾಧಿಕೃತೇನ ಲಿಖಿತೇಯಂ ಪಟ್ಟಿಕೇ...

ಸಾರಾಂಶ:- (ರಾಜನ ಆಡಳಿತದ) ೧೩ನೆಯ ವರ್ಷದ ಹೇಮಂತದ ಮೊದಲ ಪಕ್ಷದ ೧೫ನೆಯ ದಿವಸದಲ್ಲಿ ಸತ್ಯವಂತನಾದ, ದೇವಬ್ರಾಹ್ಮಣಗುರುಗಳ ಸೇವೆ ಮಾಡುವವನಾದ, ಧರ್ಮಾರ್ತ್ಥಗಳನ್ನು ಪಾಲಿಸುತ್ತಿದ್ದ, ಧರ್ಮಮಹಾರಾಜನಾದ, ಸತ್ಯವ್ರತನಾದ, ಕ್ಲಿಷ್ಟಕರ್ಮನಾದ ಶ್ರೀವಿಜಯಶಿವ ಮಾಂಧಾತೃವರ್ಮನು ಮೂಕುಂದ ಹಾರಕ್ಕೆ ಸೇರಿದ ವಲಶಟ್ಟಿಗ್ರಾಮದಲ್ಲಿ ತೈತ್ತರೀಯ (ಚರಣನಾದ)ದತ್ತಾನು ಸೂತ್ರಗಳನ್ನು ಚೆನ್ನಾಗಿ ಅಭ್ಯಾಸಮಾಡಿದ್ದ ದ್ರೋಣಾರ್ಯ ಮತ್ತು ವಲಾರ್ಯರಿಗೆ ಇಪ್ಪತ್ತು ನಿವರ್ತನ ವಿಸ್ತೀರ್ಣದ ಉಳಲು ಯೋಗ್ಯವಾದ ಭೂಮಿಯನ್ನು ಸರ್ವಬಾಧಾ ಪರಿಹಾರವಾಗಿ ನೀಡುತ್ತಾನೆ. (ಶಾಪಾಶಯ ಶ್ಲೋಕಗಳಾದ ಮೇಲೆ) ಈ ಪಟ್ಟಿಕೆಗಳನ್ನು ರಹಸ್ಯಾಧಿಕಾರಿಯಾದ ದಾಮೋದರರದತ್ತನು ಬರೆದಿರುತ್ತಾನೆ.

(ಈ ಶಾಸನವನ್ನು ಶೋಧಿಸುವಲ್ಲಿ ನೆರವಾದ ಡಾ॥ ಸೂರ್ಯನಾಥ ಯು. ಕಾಮತ್ ಅವರಿಗೂ ಶ್ರೀ ಶಿ. ರಾಜೇಂದ್ರಪ್ಪ ಅವರಿಗೂ ನನ್ನ ಕೃತಜ್ಞತೆಗಳು.)